# ಗುರುಚೇತನ – ಶಿಕ್ಷಕರ ವೃತ್ತಿಪರ ಅಭಿವೃದ್ಧಿ ಕರ್ನಾಟಕ ಸರ್ಕಾರದ ಒಂದು ಉಪಕ್ರಮ

ರುದ್ರೇಶ್ ಎಸ್



'ಸಮಾಜವೊಂದರ ಶಿಕ್ಷಕರ ಸ್ಥಾನಮಾನವು ಆ ಸಮಾಜದ ಸಾಮಾಜಿಕ-ಸಾಂಸ್ಕೃತಿಕ ನೀತಿ ನಡವಳಿಕೆಯನ್ನು ಸೂಚಿಸುತ್ತದೆ; ಯಾವುದೇ ಜನತೆಯು ತನ್ನ ಶಿಕ್ಷಕರಿಗಿಂತ ಮೇಲಿರಲು ಸಾಧ್ಯವಿಲ್ಲ' ಇಂತಹ ಅನುಭವದ ಮಾತುಗಳು ಮಾನವರ ಜ್ಞಾನದ ಶಾಶ್ವತ ತುಡಿತವನ್ನು ತಣಿಸುವವರಾಗಿ, ಪ್ರೇರೇಪಿಸುವವರಾಗಿ ಮತ್ತು ಪ್ರವರ್ತಿಸುವವರಾಗಿ ಶಿಕ್ಷಕರು ವಹಿಸಿರುವ ಪಾತ್ರದ ಮಹತ್ತ್ವವನ್ನು ಸಾರುತ್ತವೆ. ಮಾನವೀಯವಾದ, ಸಮತೆಯಿಂದ ಕೂಡಿದ ಮತ್ತು ಸುಸ್ಥಿರವಾದ ಒಳ್ಳೆಯ ಸಮಾಜವೊಂದರ ನಿರ್ಮಾಣ ನಮ್ಮೆಲ್ಲರ ಆಶಯವಾಗಿದೆ. ಶಾಲಾ ಶಿಕ್ಷಣವು ಈ ನಿಟ್ಟಿನಲ್ಲಿ ತಳಹದಿಯನ್ನು ಹಾಕಿಕೊಡುತ್ತದೆ ಎಂದೇ ಗ್ರಹಿಸಲಾಗಿದೆ. ಶಿಕ್ಷಣದಿಂದ ಅಹಿಂಸಾತ್ಮಕವಾದ ಮತ್ತು ಸುಸ್ಥಿರವಾದ ಮಾರ್ಗವೊಂದರ ಮೂಲಕ ಅಂತಹ ಸಮಾಜವೊಂದನ್ನು ಕಟ್ಟಲು ಸಾಧ್ಯ. ಭಾರತವು ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕನ್ನು ಖಾತರಿಪಡಿಸುವುದಕ್ಕಾಗಿ ಮೂಲಭೂತ ಹಕ್ಕಿನಲ್ಲಿ ತಿದ್ದುಪಡಿ ತರುವ ಮೂಲಕ ಪ್ರತಿಯೊಬ್ಬರಿಗೂ ಶಿಕ್ಷಣ ನೀಡಲು ಶ್ರಮಿಸಿದೆ. ಪರಿಣಾಮವಾಗಿ, ಪ್ರತಿಮಗುವಿಗೂ ಗುಣಮಟ್ಟದ ಶಾಲಾ ಶಿಕ್ಷಣದ ಲಭ್ಯತೆಯನ್ನು ಖಾತರಿಪಡಿಸಲು ಶ್ರಮಿಸಲಾಗಿದೆ. ದುರ್ಬಲ ವರ್ಗಗಳ ಕುಟುಂಬಗಳ ಮಕ್ಕಳಿಗೆ ಖಾಸಗಿ ಶಾಲೆಗಳಲ್ಲಿ ಪ್ರವೇಶಾವಕಾಶವನ್ನು ಮೀಸಲಾಗಿರಿಸುವುದು ಇದರ ಒಂದು ಭಾಗವಾಗಿದೆ. ಈ ಮೂಲಕ, ಎಲ್ಲ ಮಕ್ಕಳಿಗೂ ಕಡ್ಡಾಯವಾಗಿ ಶಿಕ್ಷಣ ನೀಡಲು ಸರ್ಕಾರ ಆದೇಶಿಸಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಎಲ್ಲ ಮಕ್ಕಳಿಗೂ ಶಾಲಾ ಪ್ರವೇಶವನ್ನು ಸುಗಮಗೊಳಿಸುವುದನ್ನು ಖಾತರಿಪಡಿಸಲು ಮತ್ತು ಮಕ್ಕಳ ನಿಯಮಿತ ಹಾಜರಾತಿಯನ್ನು ಉತ್ತೇಜಿಸಲು ವಿವಿಧ ಸರ್ಕಾರಿ ಕಾರ್ಯಕ್ರಮಗಳ ಮೂಲಕ ಅತ್ಯುತ್ತಮ ರೀತಿಯಲ್ಲಿ ಶ್ರಮಿಸುತ್ತಿದೆ. ಶಾಲಾ ದಾಖಲಾತಿಗೆ ಸಂಬಂಧಿಸಿದಂತೆ ಭಾರತ ಉತ್ತಮ ಸಾಧನೆ ಮಾಡಿದೆ ಮತ್ತು ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿಯನ್ನು ಗಮನಾರ್ಹವಾಗಿ ನಿರ್ವಹಣೆ ಮಾಡಲಾಗಿದೆ. ನಿಭಾಯಿಸದೆ ಉಳಿದು ಹೋಗಿರುವ ಸಮಸ್ಯೆಯೆಂದರೆ ಅದು ಶಿಕ್ಷಣದ ಗುಣಮಟ್ಟ. 'ಅಸರ್' (ASER– Annual Status of Education Report) ಮತ್ತು 'ನಾಸ್' (NAS – National Achievement Survey)) ಸೇರಿದಂತೆ ಹಲವು ವರದಿಗಳು ಎಲ್ಲ ವಿಷಯಗಳಲ್ಲೂ ಮಕ್ಕಳಲ್ಲಿ ಕಲಿಕಾಮಟ್ಟದಲ್ಲಿ ಕೊರತೆ ಇರುವುದನ್ನು ಗುರುತಿಸಿದೆ. ಇತ್ತೀಚಿನ ದಿನಗಳಲ್ಲಿ ಇದು ಶಾಲಾ ಶಿಕ್ಷಣದಲ್ಲಿ ಗಂಭೀರ ಸಮಸ್ಯೆಯಾಗಿ ಪರಿಣಮಿಸಿದೆ ಮತ್ತು ಶಾಲಾ ಶಿಕ್ಷಣದ ಒಂದು ಪ್ರಮುಖ ಕಾಳಜಿಯಾಗಿ ಗುರುತಿಸಲಾಗಿದೆ. ಶಿಕ್ಷಣದ ಗುಣಮಟ್ಟವು ಗಣನೀಯವಾಗಿ ಶಿಕ್ಷಕರಿಂದ ಮತ್ತು ತರಗತಿಯಲ್ಲಿನ ಅವರ ತೊಡಗಿಸಿಕೊಳ್ಳುವಿಕೆಯಿಂದ ನಿರ್ಧರಿಸಲ್ಪಡುತ್ತದೆ. ಮೂಲಭೂತ ಸೌಕರ್ಯ, ವಿದ್ಯಾರ್ಥಿಗಳು-ಶಿಕ್ಷಕರ ಅನುಪಾತ (PTR – Pupil Teacher Ratio) ಮತ್ತು ಶಾಲಾ ನಾಯಕತ್ವ ಮುಂತಾದ ಇತರ ಅವಶ್ಯಕತೆಗಳ ಜೊತೆಗೆ ಶಿಕ್ಷಕರ ವೃತ್ತಿಪರ ಸಾಮರ್ಥ್ಯಗಳು ಶಾಲೆಗಳು ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಅಂತಿಮವಾಗಿ ಕೊಡುಗೆ ನೀಡುತ್ತದೆ.

ಸೇವಾಪೂರ್ವ ಮತ್ತು ಸೇವಾನಿರತ ಇವೆರಡನ್ನೂ ಒಳಗೊಂಡಂತೆ ಶಿಕ್ಷಕರ ಪ್ರಶಿಕ್ಷಣ ಕಾರ್ಯಕ್ರಮದಲ್ಲಿ ಹಲವು ಸಮಸ್ಯೆಗಳಿವೆ. ಇವೆರಡೂ ಕಾರ್ಯಕ್ರಮಗಳೂ ಒಟ್ಟಾರೆಯಾಗಿ ಆಯಾ ವಿದ್ಯಾರ್ಥಿ ವಿಶಿಷ್ಟವಾದ ಮತ್ತು ಶಾಲಾ ಸಂದರ್ಭಕ್ಕೆ ಸೂಕ್ತವಾದ ಅಲ್ಪಾವಧಿಯ ಹಾಗೂ ವಿಷಯಗಳ ಕಲಿಕಾ-ಬೋಧನಾ ಪ್ರಕ್ರಿಯೆಯ ಮೇಲೆ ಗಮನ ಕೇಂದ್ರೀಕರಿಸಿ ಶಿಕ್ಷಕರನ್ನು ತಯಾರಿ ಮಾಡುವ ಸಾಮರ್ಥ್ಯವನ್ನು ಹೊಂದಿಲ್ಲ. ಶಾಲೆಯ ಜ್ಞಾನ ಮತ್ತು ಕಲಿಕಾರ್ಥಿಗಳು ಹಾಗೂ ಕಲಿಕಾ ಪ್ರಕ್ರಿಯೆಗೆ ಸಂಬಂಧಿಸಿದ ಪ್ರಶ್ನೆಗಳೊಂದಿಗೆ ತಮ್ಮನ್ನು ತೊಡಗಿಸಿಕೊಳ್ಳುವಲ್ಲಿ ಶಾಲಾ ಸಂದರ್ಭದಲ್ಲಿ ಉದ್ಭವಿಸುವ ಅಗತ್ಯಗಳು ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಶಿಕ್ಷಕರಿಗೆ ಸಿದ್ಧತೆಯ ಅವಶ್ಯಕತೆ ಇದೆ ಎಂಬುದು ಸ್ಪಷ್ಟ. ಸಮಾಜದಲ್ಲಿ ವ್ಯಾಪಕವಾಗಿ ಸಂಭವಿಸುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳಿಗೆ ತಕ್ಕಂತೆ ಶಾಲಾ ವ್ಯವಸ್ಥೆಯಿಂದ ಮತ್ತು ಶಿಕ್ಷಕರಿಂದ ಇರುವ ನಿರೀಕ್ಷೆಗಳು ಕಾಲಕಾಲಕ್ಕೆ ಬದಲಾಗುತ್ತವೆ. ಇದು ಶಿಕ್ಷಕ ಸಮುದಾಯದಲ್ಲಿ ವೃತ್ತಿಪರ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಶಿಕ್ಷಕರ ಪ್ರಶಿಕ್ಷಣವನ್ನು ಪರಿಷ್ಕರಿಸಲು ಪ್ರೇರೇಪಿಸುತ್ತದೆ.

ಶಿಕ್ಷಕರ ಪ್ರಶಿಕ್ಷಣವನ್ನು ಮರುವಿನ್ಯಾಸಗೊಳಿಸುವುದರ ಪರವಾಗಿ ಇರುವ ಪ್ರಾಥಮಿಕ ಕಾರಣಗಳನ್ನು ಮುಂದೆ ಕೊಡಲಾಗಿದೆ:

1. ಅಲ್ಪಾವಧಿಯ ಸೇವಾಪೂರ್ವ ಕಾರ್ಯಕ್ರಮಗಳು ಕೆಲವು ಮೂಲಭೂತ ದೃಷ್ಟಿಕೋನಗಳನ್ನು ಮಾತ್ರ ಕಟ್ಟಿಕೊಡುತ್ತದೆ; ಇದು ಸೇವಾನಿರತ ಶಿಕ್ಷಕರ ಪ್ರಶಿಕ್ಷಣದೊಂದಿಗೆ ಅತ್ಯಲ್ಪ ಸಂಬಂಧವನ್ನು ಹೊಂದಿದ್ದು, ಇಂತಹ ಕಾರ್ಯಕ್ರಮಗಳಲ್ಲಿ ಶಾಲಾ ಶಿಕ್ಷಕರ ಕೆಲವು ನಿರ್ಣಾಯಕ ವೃತ್ತಿಪರ ಅಗತ್ಯಗಳು ಪರಿಗಣನೆಗೆ ಬಾರದೇ ಉಳಿದುಬಿಡುತ್ತವೆ.
2. ಸೇವಾಪೂರ್ವ ಮತ್ತು ಸೇವಾನಿರತ ಶಿಕ್ಷಕರ ಪ್ರಶಿಕ್ಷಣ ಕಾರ್ಯಕ್ರಮಗಳನ್ನು ಸಂಯೋಜಿಸುವುದರ ಕುರಿತು ಇದುವರೆಗೂ ಸಮರ್ಪಕ ರೀತಿಯಲ್ಲಿ ಗಮನಹರಿಸಲಾಗಿಲ್ಲ.
3. ಸೇವಾಪೂರ್ವ ಮತ್ತು ಸೇವಾನಿರತ ಇವೆರಡು ಕಾರ್ಯಕ್ರಮಗಳಲ್ಲೂ ಸಿದ್ಧಾಂತ ಮತ್ತು ಅಭ್ಯಾಸದ ನಡುವಿನ ಪರಸ್ಪರ ಸಂಬಂಧವು ದುರ್ಬಲವಾಗಿದೆ.
4. ಪ್ರಸ್ತುತ ಸೇವೆಯಲ್ಲಿ ಇರುವ ಶಿಕ್ಷಕರು ಸದಾ ಚಲನಶೀಲವಾಗಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಬದಲಾಗುತ್ತಿರುವ ಮಾದರಿಗಳ ಕುರಿತು ತಿಳಿದಿರುವ ಅವಶ್ಯಕತೆ ಇದೆ. ಇದಕ್ಕೆ ಜ್ಞಾನವನ್ನು ಸಮೃದ್ಧಗೊಳಿಸುತ್ತಲಿರಬೇಕಾಗುತ್ತದೆ ಮತ್ತು ಮೂಲ ಪರಿಕಲ್ಪನೆಗಳು ಹಾಗೂ ಶಿಕ್ಷಣದ ಗುರಿಗಳ ಕುರಿತ ತಿಳುವಳಿಕೆಯನ್ನು ಹೊಂದಿರಬೇಕಾಗುತ್ತದೆ. ಸೇವಾಪೂರ್ವ ತರಬೇತಿಯಲ್ಲಿ ಇದನ್ನು ಸಾಕಷ್ಟು ಸಂಪೂರ್ಣವಾಗಿ

ಪರಿಚಯಿಸಲಾಗಿರುವುದಿಲ್ಲ ಹಾಗೆಯೇ ಸೇವಾ ನಿರತ ತರಬೇತಿಯಲ್ಲಿ ಇದಕ್ಕಾಗಿ ಸಾಕಷ್ಟು ಸಮಯವನ್ನು ಮೀಸಲಿಡಲು ಸಾಧ್ಯವಿಲ್ಲದೇ ಇರುವುದರಿಂದ ಈ ಕಂದಕವು ಮುಚ್ಚದೆ ಹಾಗೆಯೇ ಉಳಿದುಬಿಡುತ್ತದೆ.

5. ಪ್ರಸ್ತುತ ಇರುವ ಸೇವಾನಿರತ ವೃತ್ತಿ ಸಾಮರ್ಥ್ಯಾಭಿವೃದ್ಧಿ ಕಾರ್ಯಕ್ರಮಗಳು ಅತ್ಯವಶ್ಯಕವಾಗಿರುವ ಕಲಿಕಾ-ಬೋಧನಾ ಪ್ರಕ್ರಿಯೆ ಕುರಿತ ತಿಳುವಳಿಕೆಯನ್ನು ನೀಡುತ್ತಿಲ್ಲ ಅಥವಾ ಸಮರ್ಥ ಶಿಕ್ಷಕರಾಗುವ ನಿಟ್ಟಿನಲ್ಲಿ ಅಗತ್ಯ ಸಾಮರ್ಥ್ಯಗಳನ್ನು ಮತ್ತು ಸೂಕ್ತ ಮನೋಧರ್ಮವನ್ನು ಸಾಕಷ್ಟು ಪ್ರಮಾಣದಲ್ಲಿ ಬೆಳೆಸುತ್ತಿಲ್ಲ.

6. ಶಿಕ್ಷಕರ ಪ್ರಶಿಕ್ಷಣದ ಪ್ರಕ್ರಿಯೆಗಳು ಶಿಕ್ಷಕರನ್ನು ಚಿಂತನಶೀಲ ಅಭ್ಯಾಸಿಗರನ್ನಾಗಿ ಮಾಡುವಲ್ಲಿ ಸೋತಿವೆ.

7. ಸೇವಾನಿರತ ಕಾರ್ಯಕ್ರಮಗಳು ರಚನಾತ್ಮಕ ಕಲಿಕಾ-ಬೋಧನಾ ಪ್ರಕ್ರಿಯೆಗಳೊಂದಿಗೆ ಸಂಯೋಜಿತವಾದ ಆಳವಾದ ಪರಿಕಲ್ಪನಾತ್ಮಕ ತಿಳುವಳಿಕೆಯನ್ನು ಶಿಕ್ಷಕರ ನಡುವೆ ಬೆಳೆಸುವುದಕ್ಕಿಂತ ಹೆಚ್ಚಾಗಿ ಪಠ್ಯಪುಸ್ತಕಕ್ಕೆ ಸಂಬಂಧಿಸಿದ ಪ್ರಶ್ನೆಗಳು ಮತ್ತು ವಿಷಯಗಳಲ್ಲಿನ ಕ್ಲಿಷ್ಟಕರ ಭಾಗಗಳಿಗೆ ಹೆಚ್ಚಿನ ಗಮನನೀಡುತ್ತವೆ.

8. ಹೆಚ್ಚಿನ ಪ್ರಕರಣಗಳಲ್ಲಿ, ವಿಶೇಷವಾಗಿ, ಸೇವಾನಿರತ ಕಾರ್ಯಕ್ರಮ/ತರಬೇತಿಗಳಲ್ಲಿ ಪ್ರಸ್ತುತ ವರ್ಷ, ಕಳೆದ ವರ್ಷ ಮತ್ತು ಬರಲಿರುವ ವರ್ಷಗಳ ನಡುವೆ ಪರಸ್ಪರ ಸಂಬಂಧವಿಲ್ಲದಿರುವುದು ಕಂಡುಬರುತ್ತದೆ. ಕಾರ್ಯಕ್ರಮ ಗಳನ್ನು ಪ್ರತ್ಯೇಕ ತುಣುಕುಗಳಾಗಿ ರೂಪಿಸಲಾಗಿರುತ್ತದೆ.

9. ನಿರೀಕ್ಷಿತ ಗುಣಮಟ್ಟದಲ್ಲಿ ಶಿಕ್ಷಕರನ್ನು ತಲುಪಬಲ್ಲ, ಸಮರ್ಪಕವಾಗಿ ತರಬೇತು ಹೊಂದಿದ ಸಂಪನ್ಮೂಲ ವ್ಯಕ್ತಿಗಳು ಜಿಲ್ಲಾ ಮತ್ತು ತಾಲ್ಲೂಕಾ ಮಟ್ಟದಲ್ಲಿ ಲಭ್ಯವಿಲ್ಲದಿರುವುದು ಮತ್ತೊಂದು ಅನನುಕೂಲತೆಯಾಗಿದೆ.

10. ಹಲವು ಹಂತಗಳಲ್ಲಿ ಶ್ರೇಣೀಕೃತ ವಿಧಾನದಲ್ಲಿ ತರಬೇತಿಗಳನ್ನು ನಡೆಸುವುದರಿಂದ ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಸಾಗುವಲ್ಲಿ ಸಾಕಷ್ಟು ವಿಚಾರಗಳು ಭಾರೀ ದೊಡ್ಡ ಪ್ರಮಾಣದಲ್ಲಿ ಎಲ್ಲರಿಗೂ ತಲುಪುವ ಮುನ್ನವೇ ಕಳೆದು ಹೋಗುತ್ತವೆ.

11. ಶಿಕ್ಷಕರ ಅಗತ್ಯಗಳು ಮತ್ತು ಆಸಕ್ತಿಗಳನ್ನು ಪರಿಗಣಿಸದೆ ಕೇಂದ್ರೀಕೃತ ನೆಲೆಯಲ್ಲಿ ವಿನ್ಯಾಸಗೊಳ್ಳುವ ಕಾರ್ಯಕ್ರಮಗಳು / ಕೈಪಿಡಿಗಳಲ್ಲಿರುವ ವಿಷಯಗಳನ್ನೇ ತರಬೇತಿಗಳಲ್ಲಿ ಕೊಡಬೇಕಾಗಿರುತ್ತದೆ.

ಈ ಪರಿಸ್ಥಿತಿಯಲ್ಲಿ, ಪಠ್ಯಕ್ರಮದ ಪರಿಣಾಮಕಾರಿ ನಿರ್ವಹಣೆಗೆ ಮತ್ತು ಇರುವ ಅಂತರದ ನಿವಾರಣೆಗೆ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಮುಂದುವರೆಸುವುದು ಬಹಳ ಮುಖ್ಯವಾಗಿರುತ್ತದೆ. ಸಾವಿರಾರು ಸಂಖ್ಯೆಯಲ್ಲಿ ಮಕ್ಕಳು ಪ್ರಸ್ತುತ ಇರುವ ಪ್ರಕ್ರಿಯೆಯ ಮೂಲಕ ಕಲಿತು ಹೊರಬರುತ್ತಿರುವಾಗ ಸಂಪನ್ಮೂಲಗಳ ಕೊರತೆಯನ್ನು ತುಂಬಲು ಸಾಕಷ್ಟು ಗಮನ ನೀಡುವುದರ ಮೂಲಕ ಬಹಳಕಟ್ಟು ನಿಟ್ಟಾಗಿ ಈ ಅಂತರವನ್ನು ನಿಭಾಯಿಸುವ ಅವಶ್ಯಕತೆ ಇದೆ. ಪ್ರಭಾವ ಬೀರಬಹುದಾದ ಪ್ರತಿಯೊಂದು ಅಂಶವನ್ನು ಮತ್ತು ಶಿಕ್ಷಕರಿಗೆ ಅರ್ಥಪೂರ್ಣ ಅನುಭವವನ್ನು ನೀಡುವುದನ್ನು ಗಮನದಲ್ಲಿಟ್ಟುಕೊಂಡು ಸೇವಾನಿರತ ಕಾರ್ಯಕ್ರಮಕ್ಕೆ ಮೇಲೆ ಹೇಳಿರುವ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸಬಲ್ಲ ದೂರದೃಷ್ಟಿಯಿಂದ ಕೂಡಿರುವ ಚೌಕಟ್ಟೊಂದನ್ನು ನಿರ್ಮಿಸಬೇಕಾದ ಅವಶ್ಯಕತೆ ಇದೆ.

ಕರ್ನಾಟಕ ಸರ್ಕಾರ(GoK)ದ ಸಾರ್ವಜನಿಕ ಶಿಕ್ಷಣ ಇಲಾಖೆಯು ಗುರುಚೇತನ ಎಂಬ ಕಾರ್ಯಕ್ರಮದ ಹೆಸರಿನಲ್ಲಿ ಸೇವಾನಿರತ ಶಿಕ್ಷಕರ ಪ್ರಶಿಕ್ಷಣ ಕಾರ್ಯಕ್ರಮವನ್ನು ಕೂಲಂಕಷವಾಗಿ ಪರಿಶೀಲಿಸುವ ಸವಾಲಿನ ಕೆಲಸವನ್ನು ಕೈಗೆತ್ತಿಕೊಂಡಿದೆ. ಸೇವಾನಿರತ ಶಿಕ್ಷಕರ ಪ್ರಶಿಕ್ಷಣ ಕಾರ್ಯಕ್ರಮಗಳಲ್ಲಿನ ಸಮಸ್ಯೆಗಳನ್ನು ಪರಿಹರಿಸುವುದು ಮತ್ತು ಶಿಕ್ಷಕರ ಅಭಿವೃದ್ಧಿ ಪ್ರಯತ್ನಗಳು ಅರ್ಥಪೂರ್ಣ ಮತ್ತು ಸಕಾಲಿಕ ಎನಿಸುವಂತೆ ನೋಡಿಕೊಳ್ಳುವುದು ಈ ಉಪಕ್ರಮದ ಗುರಿಯಾಗಿದೆ. ಅಜೀಂ ಪ್ರೇಮ್‌ಜಿ ಫೌಂಡೇಷನ್ನಿನ ಸಹಯೋಗದಲ್ಲಿ, ಆಶಯ ಮತ್ತು ವಿಷಯವನ್ನು ಮರು ವಿನ್ಯಾಸಗೊಳಿಸಿ, ವಿಷಯವನ್ನು ತಲುಪಿಸುವ ಪ್ರಕ್ರಿಯೆಯ ಜೊತೆಗೆ ಶಿಕ್ಷಕರ ಕಲಿಕೆಯ ಜಾಡನ್ನು ದಾಖಲಿಸಿಕೊಂಡು ನಿರ್ವಹಿಸುವ ಒಂದು ವ್ಯಾಪಕವಾದ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲಾಗಿದೆ.

ಕಳೆದ ದಶಕದ ಒಳನೋಟಗಳ ಆಧಾರದ ಮೇಲೆ ಹಾಗೂ ರಾಷ್ಟ್ರೀಯ ದಾಖಲೆಗಳಾದ 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು 2009ರ ಶಿಕ್ಷಕರ ಪ್ರಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಇವೆರಡನ್ನು ಗಮನದಲ್ಲಿರಿಸಿಕೊಂಡು – ಶಿಕ್ಷಕರು ಚಿಂತನಶೀಲ ಅಭ್ಯಾಸಿಗರಾಗುವರು, ಪಠ್ಯಕ್ರಮ, ಪಠ್ಯಸೂಚಿ ಮತ್ತು ಪಠ್ಯಪುಸ್ತಕಗಳ ಕುರಿತು ಪ್ರಶ್ನಿಸಲು ಸಮರ್ಥರಾಗುವರು, ಶಾಲಾ ಪಠ್ಯಕ್ರಮವನ್ನು ಸುಧಾರಿಸುವರು, ಸಮುದಾಯದ ಜ್ಞಾನವನ್ನು ಶಾಲೆಯೊಂದಿಗೆ ಸಂಯೋಜಿಸುವ ಮೂಲಕ ಶಾಲಾ ಪಠ್ಯಕ್ರಮವನ್ನು ಸಮೃದ್ಧಗೊಳಿಸುವರು ಮತ್ತು ಸಿದ್ಧಾಂತ ಹಾಗೂ ಅಭ್ಯಾಸದ ನಡುವೆ ಪರಸ್ಪರ ಸಂಬಂಧವನ್ನು ಸ್ಥಾಪಿಸುವರು ಎಂಬ ಮುನ್ನೋಟದೊಂದಿಗೆ ರಾಜ್ಯವು ಸೇವಾನಿರತ ಶಿಕ್ಷಕರಿಗೆ ವೃತ್ತಿಪರ ಅಭಿವೃದ್ಧಿ ಯೋಜನೆಯನ್ನು ರೂಪಿಸಿದೆ.

ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲಾದ ಪ್ರಮುಖ ತತ್ತ್ವಗಳನ್ನು ಈ ಕೆಳಗೆ ಚರ್ಚಿಸಲಾಗಿದೆ:

1. ಯೋಜನೆಯು ದೀರ್ಘಾವಧಿಯದಾಗಿದ್ದು ಶಿಕ್ಷಕರನ್ನು ವೃತ್ತಿಪರ ಅಭಿವೃದ್ಧಿಯೆಡೆಗೆ ಮುನ್ನಡೆಸುವಂತಿರಬೇಕು. ಸೇವಾನಿರತ ಶಿಕ್ಷಣ ಪ್ರಶಿಕ್ಷಣವು ಒಂದು ಸುಸಂಬದ್ಧ ನಿರಂತರ ಪ್ರಕ್ರಿಯೆಯಾಗಿರಬೇಕೇ ಹೊರತು, ಎಲ್ಲವನ್ನು ಒಟ್ಟಿಗೆ ಕಟ್ಟಿಕೊಡದ ಚದರಿದಂತೆ ಯಾವಾಗಲೋ ಒಮ್ಮೆ ನಡೆಯುವ ಒಂದು ಏಕ ಅವಧಿಯದ್ದಾಗಿರಬಾರದು. ಶಿಕ್ಷಕರ ಅಭಿವೃದ್ಧಿಯ ದೀರ್ಘಾವಧಿಯ ಯೋಜನೆಯು ವ್ಯಕ್ತಿಗತವಾಗಿ ಶಿಕ್ಷಕರ ಸಮಗ್ರ ಅಭಿವೃದ್ಧಿಗೆ ಅನುವು ಮಾಡಿಕೊಡುತ್ತದೆ.

2. ಯೋಜನೆಯು ತಜ್ಞರಿಂದ ಮುನ್ನಡೆಸಲ್ಪಡುವ ಕಲಿಕೆ, ಸಹವರ್ತಿ ಕಲಿಕೆ ಹಾಗೂ ಸ್ವಯಂಕಲಿಕೆಗಳಿಂದ ಕೂಡಿದ ಸಂಯೋಜಿತ ಕಲಿಕಾ ವಿಧಾನಗಳಿಗೆ ಆಸ್ಪದ ನೀಡುವುದರ ಜೊತೆಗೆ ಕಲಿಕೆಯಲ್ಲಿ ಬಹಳ ನಿರ್ಣಾಯಕವಾದ ವಿಕೇಂದ್ರೀಕೃತ ಸ್ವಯಂಕಲಿಕೆ ಮತ್ತು ಸಹವರ್ತಿ ಕಲಿಕೆಗಳನ್ನು ಪೋಷಿಸು ವಂತಹ ಸ್ವಾವಲಂಬಿ ಕಲಿಕಾ ಅವಕಾಶಗಳನ್ನು ಸೃಷ್ಟಿಸಬೇಕು.

3. ಎಲ್ಲ ತರಗತಿಗಳು ಹಾಗೂ ವಿಷಯಗಳಿಗೆ ಸಂಬಂಧಿಸಿದಂತೆ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಗೆ ಇದು ಸ್ಪಂದಿಸುವಂತಿರಬೇಕು. ತರಬೇತಿಯ ಪಠ್ಯಕ್ರಮದಲ್ಲಿನ ಈ ಸಮಗ್ರತೆಯು ಶಿಕ್ಷಕರು ದೀರ್ಘಾವಧಿಯವರೆಗೆ ಇದರಲ್ಲಿ

ತಮ್ಮನ್ನು ತೊಡಗಿಸಿಕೊಂಡಿರುವಂತೆ ಮಾಡುತ್ತದೆ ಮತ್ತು ನಿರಂತರವಾದ ಹಾಗೂ ಸಂಬಂಧ ಹೊಂದಿರುವಂತಹ ಅವಕಾಶಗಳನ್ನು ಬೆಳೆಸುತ್ತದೆ.

4. ವಿವಿಧ ವೇದಿಕೆಗಳಾದ ಕಾರ್ಯಾಗಾರಗಳು, ವಿಚಾರ ಸಂಕಿರಣಗಳು ಮತ್ತು ಅಧ್ಯಯನ ಗುಂಪುಗಳು ಮುಂತಾದುವುಗಳ ನಡುವೆ ತಮಗೆ ಸೂಕ್ತವಾದುದನ್ನು ಪಡೆದುಕೊಳ್ಳಲು ಅನುವಾಗುವಂತೆ ಶಿಕ್ಷಕರಿಗೆ ಇದು ಆಯ್ಕೆಯ ಅವಕಾಶಗಳನ್ನು ಒದಗಿಸಬೇಕು.

5. ಶಿಕ್ಷಕರ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಬಳಸುವ ಸಾಮಗ್ರಿಗಳು ಶೈಕ್ಷಣಿಕ ದೃಷ್ಟಿಕೋನ, ವಿಷಯದ ದೃಷ್ಟಿಕೋನ, ಪಠ್ಯವಸ್ತು ಮತ್ತು ಕಲಿಕಾ-ಬೋಧನಾ ಪ್ರಕ್ರಿಯೆ (ಶಿಕ್ಷಣಶಾಸ್ತ್ರ) ಇವುಗಳನ್ನೆಲ್ಲ ಒಳಗೊಂಡು ಸಮಗ್ರವಾಗಿರಬೇಕು.

6. ಶಿಕ್ಷಕರನ್ನು ಕಲಿಕೆಯಲ್ಲಿ ತೊಡಗಿಸುವ ಎಲ್ಲ ಕಾರ್ಯಕ್ರಮಗಳೂ ಸ್ಥಿರವಾದ ಒಂದಷ್ಟು ಶೈಕ್ಷಣಿಕ ವಿಚಾರಗಳಿಂದ ಮಾರ್ಗದರ್ಶನ ಹೊಂದಿರಬೇಕು. ಉದಾಹರಣೆಗೆ, ಭಾರತೀಯ ಸಮಾಜದಲ್ಲಿ ಶಾಲೆಗಳ ಪಾತ್ರ, ಮಕ್ಕಳು ಹೇಗೆ ಕಲಿಯುತ್ತಾರೆ, ಪ್ರತಿಯೊಂದು ವಿಷಯದ ಸ್ವರೂಪ ಮತ್ತು ಅದರ ಕಲಿಕಾ-ಬೋಧನಾ ಪ್ರಕ್ರಿಯೆ (ಶಿಕ್ಷಣಶಾಸ್ತ್ರ), ಮಗುವಿನ ದೈಹಿಕ-ಭಾವನಾತ್ಮಕ-ಸಾಮಾಜಿಕ-ನೈತಿಕ ಬೆಳವಣಿಗೆ ಇವುಗಳೆಲ್ಲ ಮುಖ್ಯವಾಗಿದ್ದು, ಎಲ್ಲ ವಿಧವಾದ ಶಿಕ್ಷಕರ ಪ್ರಶಿಕ್ಷಣ ಕಾರ್ಯಕ್ರಮಗಳಲ್ಲಿ ಅವು ಪ್ರತಿಫಲನಗೊಳ್ಳಬೇಕು.

ಶಿಕ್ಷಕರ ಪ್ರಶಿಕ್ಷಣದಲ್ಲಿನ ಲೋಪದೋಷಗಳನ್ನು ಸರಿಪಡಿಸಲು ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳು ಬದ್ಧರಾಗಿದ್ದರು. ಈ ಕಾರ್ಯಕ್ರಮದ ಸೊಗಸೇನೆಂದರೆ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಇಲಾಖೆಯ ಹೆಚ್ಚುವರಿ ಕಾರ್ಯದರ್ಶಿಯವರಿಂದ ಹಿಡಿದು ಪ್ರತಿಯೊಂದು ಶಾಲೆಯ ಶಿಕ್ಷಕರವರೆಗೆ ಎಲ್ಲ ಹಂತದ ಅಧಿಕಾರಿಗಳೂ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಮೊದಲನೆಯ ವರ್ಷದ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಎರಡು ವರ್ಷಗಳ ಕಾಲ ನಿರಂತರವಾಗಿ ಶ್ರಮಿಸಲಾಯಿತು. ದೀರ್ಘಾವಧಿಯ ಯೋಜನೆಗಾಗಿ ಮತ್ತು ಶಿಕ್ಷಕರು ತಮ್ಮ ವೃತ್ತಿಪರ ಅಭಿವೃದ್ಧಿಯಲ್ಲಿ ತಮ್ಮ ಅಗತ್ಯ ಮತ್ತು ಆಸಕ್ತಿಗಳಿಗೆ ಅನುಗುಣವಾಗಿ ಮಾಡ್ಯೂಲ್ (ತರಬೇತಿಯ ಕೈಪಿಡಿ) ಗಳನ್ನು ಆಯ್ಕೆಮಾಡಿಕೊಳ್ಳುವ ಅವಕಾಶ ನೀಡುವ ನಿಟ್ಟಿನಲ್ಲಿ ಐದು ವರ್ಷಗಳ ಕಾಲಾವಧಿಯನ್ನು ರೂಪಿಸಲಾಯಿತು.

ಕಾರ್ಯಕ್ರಮದ ಪರಿಕಲ್ಪನೆ ರೂಪುಗೊಳ್ಳುತ್ತಿರುವ ಹಂತದಿಂದ ಮೊದಲ್ಗೊಂಡು ಅದು ಕಾರ್ಯಗತಗೊಳ್ಳುವ ಹಂತದವರೆಗೆ ಅದನ್ನು ನಾಲ್ಕು ಹಂತಗಳಲ್ಲಿ ವಿನ್ಯಾಸಗೊಳಿಸಲಾಯಿತು:

(ಎ) ಪಠ್ಯಕ್ರಮ ಅಭಿವೃದ್ಧಿ

(ಬಿ) ಮಾಡ್ಯೂಲ್ ರೂಪಿಸುವಿಕೆ

(ಸಿ) ಸಂಪನ್ಮೂಲ ವ್ಯಕ್ತಿಗಳ ತಯಾರಿ, ಮತ್ತು

(ಡಿ) ಕಾರ್ಯಕ್ರಮಕ್ಕೆ ಚಾಲನೆ.

### ಎ) ಪಠ್ಯಕ್ರಮ ಅಭಿವೃದ್ಧಿ

ಕರ್ನಾಟಕದ ಬೇರೆ ಬೇರೆ ಭಾಗಗಳ ಶಿಕ್ಷಕರು, ಶಿಕ್ಷಕರ ಪ್ರಶಿಕ್ಷರು ಮತ್ತು ವಿಷಯ ತಜ್ಞರು ಹಾಗೂ ಅಜೀಂ ಪ್ರೇಮ್‌ಜಿ ಫೌಂಡೇಷನ್ನಿನ ಸದಸ್ಯರ ಸಹಯೋಗದೊಂದಿಗೆ ಈ ಪಠ್ಯಕ್ರಮವನ್ನು ಅಭಿವೃದ್ಧಿಪಡಿಸಲಾಯಿತು. ಶಿಕ್ಷಕರ ಅಗತ್ಯಗಳನ್ನು ಮತ್ತು ರಾಷ್ಟ್ರೀಯ ದಾಖಲೆಗಳಲ್ಲಿ ವ್ಯಕ್ತಪಡಿಸಲಾಗಿರುವ ಶಿಕ್ಷಕರ ನಿರೀಕ್ಷೆಗಳನ್ನು ಪರಿಗಣಿಸುವುದರೊಂದಿಗೆ ಈ ಗುಂಪು ಜಾಗರೂಕತೆಯಿಂದ ಸಿದ್ಧತೆಯ ಪ್ರಕ್ರಿಯೆಯಲ್ಲಿ ಮುಂದಕ್ಕೆ ಸಾಗಿತು. ಶಿಕ್ಷಕರ ಅಭಿವೃದ್ಧಿಯ ಪಠ್ಯಕ್ರಮ ಚೌಕಟ್ಟು ಶಿಕ್ಷಕರಿಗಾಗಿ ಸಶಕ್ತವಾದ ಮತ್ತು ನಿರಂತರವಾದ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮವನ್ನು ಸಕ್ರಿಯಗೊಳಿಸುವ ನಿಟ್ಟಿನಲ್ಲಿ ದೀರ್ಘಾವಧಿಯ ಒಂದು ವಿಧಾನವನ್ನಾಗಿ ಯೋಜಿಸುವ ಮೊದಲ ಮೆಟ್ಟಿಲಾಗಿ ರೂಪುಗೊಂಡಿತು. ಈ ಪಠ್ಯಕ್ರಮವು ಶಿಕ್ಷಕರ ಸಾಮರ್ಥ್ಯಾಭಿವೃದ್ಧಿಯ ಸಾಂದರ್ಭಿಕ ನೆಲೆ, ತಾತ್ವಿಕ ಅಂಶಗಳು, ವಿಧಾನಗಳು, ಆಯ್ಕೆ ಮಾಡಿಕೊಂಡಿರುವ ಪ್ರಮುಖ ವಿಷಯಗಳು, ಪ್ರಾಯೋಗಿಕತೆ, ತರಗತಿಯಲ್ಲಿ ಅದರ ಅನ್ವಯಿಕೆ, ಶಿಕ್ಷಕರನ್ನು ತೊಡಗಿಸಿಕೊಳ್ಳುವ ಕಾರ್ಯಕ್ರಮಗಳು ಮತ್ತು ಮೌಲ್ಯಮಾಪನದ ವಿಧಾನಗಳನ್ನು ವಿವರಿಸುತ್ತದೆ. ತರಬೇತಿ ಕೋರ್ಸ್ ಮತ್ತು ಅದಕ್ಕೆ ಬೇಕಾದ ಮಾಡ್ಯೂಲ್ ಅನ್ನು ಅಭಿವೃದ್ಧಿಪಡಿಸಲು ಶಿಕ್ಷಕರಿಗೆ ಅಗತ್ಯವಿರುವ ವೈವಿಧ್ಯಮಯವಾದ ಅನೇಕ ಅಗತ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಅದಕ್ಕೆ ರೂಪು ಕೊಡಲು ಪ್ರಯತ್ನಿಸಲಾಯಿತು. ಇದೊಂದು ಸಮಗ್ರ ಪಠ್ಯಕ್ರಮ ಚೌಕಟ್ಟಾಗಿದ್ದು, ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದ ಎಲ್ಲ ಅಂಶಗಳನ್ನು (ಉದಾಹರಣೆಗೆ, ಮಕ್ಕಳು ಹೇಗೆ ಭಾಷೆಯನ್ನು ಕಲಿಯುತ್ತಾರೆ, ಕಲಿಕೆಯ ಸಾಮಾಜಿಕ ಸಂದರ್ಭ), ಶಾಲಾ ವಿಷಯಗಳಲ್ಲಿನ ಪ್ರಮುಖ ಪರಿಕಲ್ಪನೆಗಳು ಮತ್ತು ಬೋಧನಾ ವಿಧಾನಗಳನ್ನು ಒಳಗೊಂಡಿದೆ. ಇದು ಶಿಕ್ಷಕರ ಅಭಿವೃದ್ಧಿಗಾಗಿ ಸುಮಾರು 250 ವಿಷಯಗಳನ್ನು ಸೂಚಿಸಿ ಶಿಕ್ಷಕರನ್ನು ತರಬೇತಿಯಲ್ಲಿ ತೊಡಗಿಸಿಕೊಳ್ಳುವುದಕ್ಕಾಗಿ ಪ್ರತಿ ವಿಷಯವನ್ನು ನೀಡಲು ವೈವಿಧ್ಯಮಯವಾದ ಮತ್ತು ನಮ್ಯತೆಯಿಂದ ಕೂಡಿದ ಹಲವು ವಿಧಾನಗಳನ್ನು ಪ್ರಸ್ತಾಪಿಸುತ್ತದೆ. ಒಂದು ಮಾಡ್ಯೂಲ್/ಪರಿಕಲ್ಪನೆ/ವಿಷಯವಸ್ತುವನ್ನು (ವಿಷಯ ವಸ್ತು) ಶಿಕ್ಷಕರ ಆಸಕ್ತಿ ಮತ್ತು ಅವಶ್ಯಕತೆಗಳಿಗೆ ಅನುಗುಣವಾಗಿ 1 ರಿಂದ 5 ದಿನಗಳವರೆಗೆ ನಿರ್ವಹಿಸಬಹುದಾಗಿದೆ.

### ಬಿ) ಮಾಡ್ಯೂಲ್ (ಸುಗಮಕಾರರ ಕೈಪಿಡಿ) ರೂಪಿಸುವಿಕೆ

ಪಠ್ಯಕ್ರಮದ ತತ್ವಗಳನ್ನು ಅಳವಡಿಸಿಕೊಂಡು ಮಾಡ್ಯೂಲ್‌ಗಳನ್ನು ಅಭಿವೃದ್ಧಿಪಡಿಸಲಾಗಿದೆ. ಶಿಕ್ಷಣ ಇಲಾಖೆ ಮತ್ತು ಅಜೀಂ ಪ್ರೇಮ್‌ಜಿ ಫೌಂಡೇಷನ್ ಗುರುತಿಸಿದ ರಾಜ್ಯದ ಸಂಪನ್ಮೂಲ ವ್ಯಕ್ತಿಗಳ ಒಂದು ತಂಡವು ಮಾರ್ಗದರ್ಶಕರ (ಮೆಂಟರ್ ಗಳ) ಬೆಂಬಲದೊಡನೆ ಸುಮಾರು 5 ತಿಂಗಳ ಕಾಲ ಕಟ್ಟುನಿಟ್ಟಾದ ಪ್ರಕ್ರಿಯೆಯ ಮೂಲಕ ಮಾಡ್ಯೂಲ್ ಗಳನ್ನು ಅಭಿವೃದ್ಧಿಪಡಿಸಿತು. ಶಿಕ್ಷಕರ ವಿವಿಧ ಹಂತದ ತಿಳಿವಳಿಕೆಗೆ ಪ್ರತಿಸ್ಪಂದಿಸಲು ಅನುಕೂಲವಾಗುವಂತೆ ಮಾಡ್ಯೂಲ್ ಗಳನ್ನು ಶ್ರೇಣೀಕೃತವಾಗಿ ರೂಪಿಸಲಾಗಿದೆ. ದೀರ್ಘಾವಧಿಯಲ್ಲಿ, ಶಿಕ್ಷಕರಿಗೆ ಆಯ್ಕೆಮಾಡಿಕೊಳ್ಳಲು ಸಾಧ್ಯವಾಗುವಂತೆ 200-250 ಮಾಡ್ಯೂಲ್ ಗಳನ್ನು ಸಿದ್ಧಪಡಿಸುವ ಯೋಜನೆ ಇದೆ. ಈ ಮಾಡ್ಯೂಲ್ ಗಳು, ಶೈಕ್ಷಣಿಕ ದೃಷ್ಟಿಕೋನ, ವಿಷಯದ ದೃಷ್ಟಿಕೋನ, ಪ್ರಮುಖ ಪರಿಕಲ್ಪನೆಗಳು, ಕಲಿಕಾ-ಬೋಧನಾ ಪ್ರಕ್ರಿಯೆ (ಶಿಕ್ಷಣಶಾಸ್ತ್ರ) ಮತ್ತು ಮೌಲ್ಯಮಾಪನ ಇವೆಲ್ಲವನ್ನು ಒಳಗೊಂಡಿವೆ; ಇವು ಒಂದರೊಡನೊಂದು ಸಂಬಂಧ ಹೊಂದಿದ್ದು ಯಾವುದೂ ಯಾವುದರಿಂದಲೂ ಪ್ರತ್ಯೇಕವಲ್ಲ. ವಿಜ್ಞಾನ, ಗಣಿತ, ಸಮಾಜವಿಜ್ಞಾನ, ಶೈಕ್ಷಣಿಕ ದೃಷ್ಟಿಕೋನಗಳು ಇವಿಷ್ಟು ಸೇರಿದಂತೆ ಒಟ್ಟು 28 ಮಾಡ್ಯೂಲ್ ಗಳಿದ್ದು, 2017-18ರಲ್ಲಿ

ಇವನ್ನು ಕನ್ನಡ ಮತ್ತು ಹಿಂದಿ ಭಾಷೆಗಳಲ್ಲಿ ಶಿಕ್ಷಕರಿಗೆ ನೀಡಲಾಯಿತು. ಉಳಿದವುಗಳನ್ನು ಮುಂಬರು ವರ್ಷಗಳಿಗೆ ನಿಗದಿಪಡಿಸಲಾಯಿತು. ಅವಲೋಕನ ಸಮಿತಿಯ ಸಹಯೋಗದಲ್ಲಿ ಪ್ರತಿಮಾಡ್ಯೂಲ್ ಅನ್ನು ಪ್ರಾಯೋಗಿವಾಗಿ ಬಳಸಿ, ಪುನರವಲೋಕಿಸಿ ಅಂತಿಮಗೊಳಿಸಲಾಗಿತ್ತು.

**ಸಿ) ಸಂಪನ್ಮೂಲ ವ್ಯಕ್ತಿಗಳ ಸಾಮರ್ಥ್ಯ ಅಭಿವೃದ್ಧಿ**

ಬಹುದೊಡ್ಡ ಮಟ್ಟದಲ್ಲಿ ಕಾರ್ಯಕ್ರಮವನ್ನು ಕಾರ್ಯಗತಗೊಳಿಸಲು ಮತ್ತು ಎಲ್ಲ ಜಿಲ್ಲೆಗಳಲ್ಲೂ ತರಬೇತು ಹೊಂದಿದ ಸಂಪನ್ಮೂಲ ವ್ಯಕ್ತಿಗಳ ಕೊರತೆಯನ್ನು ನೀಗಿಸಲು ಪ್ರತಿ ಜಿಲ್ಲೆಯಿಂದ, ಪ್ರತಿ ಮಾಡ್ಯೂಲ್ಗಾಗಿ ನಾಲ್ಕು ಜನಸಂಪನ್ಮೂಲ ವ್ಯಕ್ತಿಗಳನ್ನು ಲಿಖಿತ ಮತ್ತು ಮೌಖಿಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಿಕೊಳ್ಳಲಾಯಿತು. ಒಟ್ಟು 112 ಹಿರಿಯ ಸಂಪನ್ಮೂಲ ವ್ಯಕ್ತಿಗಳನ್ನು (ಮಾಸ್ಟರ್ ರಿಸೋರ್ಸ್ ಪರ್ಸನ್) ಪ್ರತಿ ಜಿಲ್ಲೆಯಲ್ಲಿ ಆಯ್ಕೆಮಾಡಿಕೊಳ್ಳಲಾಯಿತು. ಪ್ರತಿ ಹಿರಿಯ ಸಂಪನ್ಮೂಲ ವ್ಯಕ್ತಿಯೂ 5 ದಿನಗಳು ಮಾಡ್ಯೂಲ್ ವಿಷಯ ವಸ್ತುವಿನ ಮೇಲೆ ಮತ್ತು ಐದು ದಿನಗಳ ಹೆಚ್ಚುವರಿ ವಿಷಯ ವಸ್ತುವಿನ ಮೇಲೆ, ಹೀಗೆ ದೃಷ್ಟಿಕೋನ, ವಿಷಯ ವಸ್ತು ಮತ್ತು ಪಠ್ಯವಸ್ತುಗಳಿಗೆ ಸಂಬಂಧಿಸಿದಂತೆ ಹತ್ತು ದಿನಗಳ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಆಗ ಅವರಿಗೆ ಐದು ದಿನಗಳ ಕಾಲ ಶಿಕ್ಷಕರೊಂದಿಗೆ ತೊಡಗಲು ಸಾಧ್ಯವಾಗುತ್ತದೆ. ಕಾರ್ಯಕ್ರಮವು ಶೈಕ್ಷಣಿಕ ದೃಷ್ಟಿಕೋನವನ್ನು ಬೆಳೆಸುವುದು (ಸಮಾಜ, ಶಿಕ್ಷಣ, ವಿದ್ಯಾರ್ಥಿ ಮತ್ತು ಬೋಧಕರ ತಿಳಿವಳಿಕೆ), ಮಾಡ್ಯೂಲ್ ವಿಷಯ ವಸ್ತುವಿನ ಆಚೆಗಿನ ತಿಳಿವಳಿಕೆ, ವಿವರಣಾತ್ಮಕ ಕಲಿಕಾ–ಬೋಧನಾ ಪ್ರಕ್ರಿಯೆಯ ನಿರೂಪಣೆಗಳನ್ನು ಒಳಗೊಂಡಿದ್ದು ಪ್ರತಿ ಹಿರಿಯ ಸಂಪನ್ಮೂಲ ವ್ಯಕ್ತಿಗೂ ತನ್ನ ನಿರೂಪಣೆಯನ್ನು ಪ್ರಾಯೋಗಿಕವಾಗಿ ತೋರಿಸಲು ಅವಕಾಶ ನೀಡಲಾಯಿತು. ಈ ಪ್ರಕ್ರಿಯೆಯಲ್ಲಿ, ಒಂದು ತಿಂಗಳ ಅವಧಿಯಲ್ಲಿ, ವಿವಿಧ ತಂಡಗಳ ಮೂಲಕ 3500 ಮುಖ್ಯ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡಲಾಯಿತು.

**ಡಿ) ಕಾರ್ಯಕ್ರಮಕ್ಕೆ ಚಾಲನೆ**

ಕಾರ್ಯಕ್ರಮಕ್ಕೆ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳು 2017ರ ಸೆಪ್ಟೆಂಬರ್ 5, ಶಿಕ್ಷಕರ ದಿನಾಚರಣೆಯಂದು ಚಾಲನೆ ನೀಡಿದರು. 2017–18ರ ಸಾಲಿನ ತರಬೇತಿಗೆ ಲಭ್ಯವಿದ್ದ 28 ಮಾಡ್ಯೂಲ್ ಗಳಲ್ಲಿ ಶಿಕ್ಷಕರು ತಮಗೆಬೇಕಾದ ಮಾಡ್ಯೂಲ್ ಗಳನ್ನು ಶಿಕ್ಷಕರ ತರಬೇತಿ ನಿರ್ವಹಣಾ ವ್ಯವಸ್ಥೆ (Teachers Training Management System–TTMS) ಯಲ್ಲಿ ಲಾಗಿನ್ ಆಗುವ ಮೂಲಕ ಆಯ್ಕೆ ಮಾಡಿಕೊಂಡರು. ಈ ವ್ಯವಸ್ಥೆಯು ಕಂಪ್ಯೂಟರ್ ಡೆಸ್ಕ್ ಟಾಪ್ ಮತ್ತು ಮೊಬೈಲ್‌ನಲ್ಲಿ ಲಭ್ಯವಿದ್ದು, ಬಹುತೇಕ ಶಿಕ್ಷಕರು ತಮ್ಮ ಆಯ್ಕೆಯ ಮಾಡ್ಯೂಲ್ ಗಳ ನಿರ್ವಹಣೆಗಾಗಿ ಮತ್ತು ತರಬೇತಿ ಕಾರ್ಯಗಾರದ ವೇಳಾಪಟ್ಟಿಯನ್ನು ಅನುಸರಿಸಲು ಮೊಬೈಲ್ ಆಪ್ ಗಳನ್ನು ಬಳಸಿದರು. ಶಿಕ್ಷಕರು ಬಯಸಿದ ಮಾಡ್ಯೂಲ್ ಗಳ ಆಯ್ಕೆಗಳು, ತಂಡಗಳ ನಿರ್ಮಾಣ, ಶಿಕ್ಷಕರಿಗೆ ಆಹ್ವಾನ, ಕಾರ್ಯಾಗಾರಗಳ ವೇಳಾಪಟ್ಟಿ ತಯಾರಿ ಮತ್ತು ಶಿಕ್ಷಕರ ಹಿಮ್ಮಾಹಿತಿ ಇವೆಲ್ಲವನ್ನೂ ಟಿಟಿಎಮ್ಎಸ್ (ಶಿಕ್ಷಕರ ತರಬೇತಿ ನಿರ್ವಹಣಾ ವ್ಯವಸ್ಥೆ – Teachers Training Management System – TTMS) ನಿರ್ವಹಿಸಿತು. ರಾಜ್ಯಮಟ್ಟದ ಪ್ರಕ್ರಿಯೆಗಳನ್ನು ಡಿಎಸ್ಇಆರ್ ಟಿ – DSERT (ರಾಜ್ಯ ಶಿಕ್ಷಣ ಮತ್ತು ತರಬೇತಿ ಇಲಾಖೆ– Department of State Education and Training) ನಿರ್ವಹಿಸಿದರೆ ಜಿಲ್ಲಾಮಟ್ಟದ ಅನುಷ್ಠಾನವನ್ನು ಡಯೆಟ್ (DIET – District Institute of Education and Training) ಗಳು ನಿರ್ವಹಿಸಿದವು. 34 ಜಿಲ್ಲೆಗಳಲ್ಲಿ ಮೂರರಿಂದ ನಾಲ್ಕು ತಿಂಗಳ ಅವಧಿಯಲ್ಲಿ ಸುಮಾರು 2000 ತಂಡಗಳಿಗೆ 28 ಮಾಡ್ಯೂಲ್ ಗಳ ತರಬೇತಿ ನೀಡಲಾಯಿತು. ಈ ಪ್ರಕ್ರಿಯೆಯಲ್ಲಿ 75000 ಶಿಕ್ಷಕರು ತರಬೇತಿ ಪಡೆದರು.

ಇದರಲ್ಲಿ ಒಂದು ಹಂತದಲ್ಲಿ ತರಬೇತಿ ಪಡೆದವರು ಮತ್ತೊಂದು ಹಂತಕ್ಕೆ ತರಬೇತಿಯನ್ನು ಕೊಂಡೊಯ್ದು ನಡೆಸುವ ಶ್ರೇಣೀಕೃತ ವಿಧಾನದ ಬದಲಿಗೆ ತರಬೇತಿ ಹೊಂದಿದ ಮುಖ್ಯ ಸಂಪನ್ಮೂಲ ವ್ಯಕ್ತಿಗಳು ಜಿಲ್ಲಾಮಟ್ಟದಲ್ಲಿ ಶಿಕ್ಷಕರ ತರಬೇತಿಗಳ ಸುಗಮಗಾರಿಕೆಯನ್ನು ನೇರವಾಗಿ ತಾವೇ ನಡೆಸಿಕೊಟ್ಟರು. ಉಪಯೋಗಿಸಲು ಯೋಗ್ಯವಾದ ಸ್ಥಿತಿಯಲ್ಲಿರುವ ಶೌಚಾಲಯಗಳು, ಶುದ್ಧ ಕುಡಿಯುವ ನೀರು, ಉತ್ತಮ ಗುಣಮಟ್ಟದ ಆಹಾರ, ಸಾಕಷ್ಟು ಗಾಳಿ ಬೆಳಕಿನ ವ್ಯವಸ್ಥೆಯಿರುವ ತರಬೇತಿ ಕೊಠಡಿಗಳು, ತಡೆರಹಿತ ವಿದ್ಯುತ್ ವ್ಯವಸ್ಥೆ ಮುಂತಾದ ಗುಣಮಟ್ಟದ ಮೂಲಭೂತ ವ್ಯವಸ್ಥೆಗಳನ್ನು ಹೊಂದಿರುವುದು ಕೂಡ ಅಷ್ಟೇ ಮುಖ್ಯವಾಗಿತ್ತು. ಈ ಕುರಿತು ಆಯಾ ಜಿಲ್ಲೆಗಳ ಡಯೆಟ್ ಗಳು ಭರವಸೆ ನೀಡಿದ್ದು, ಮಾಡ್ಯೂಲ್ ಗಳ ಗುಣಮಟ್ಟವನ್ನು ಹೆಚ್ಚಿಸಲು ಗಣನೀಯವಾಗಿ ಕೊಡುಗೆ ನೀಡಿದವು.

ಭಾರತ ದೇಶದಲ್ಲೇ ಮೊದಲ ಬಾರಿಗೆ ಶಿಕ್ಷಕರಿಗೆ ಇಷ್ಟೊಂದು ದೊಡ್ಡ ಮಟ್ಟದಲ್ಲಿ ಅವರ ಆಸಕ್ತಿಯ ಮತ್ತು ಅವಶ್ಯಕತೆಗಳಿಗೆ ತಕ್ಕಂತೆ ಮಾಡ್ಯೂಲ್‌ಗಳನ್ನು ಆಯ್ಕೆಮಾಡಿಕೊಳ್ಳುವ ಅವಕಾಶವನ್ನು ನೀಡಲಾಗಿತ್ತು. ಸರ್ಕಾರದ ಆಸಕ್ತಿ ಮತ್ತು ನಿರಂತರವಾದ ಪ್ರಯತ್ನದಿಂದ ವರ್ಷದುದ್ದಕ್ಕೂ ಈ ಕಾರ್ಯಕ್ರಮವನ್ನು ಕಟ್ಟುನಿಟ್ಟಾಗಿ ನಡೆಸಲು ಸಾಧ್ಯವಾಯಿತು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಯವರು ನಡೆಸಿಕೊಟ್ಟ ವಿಶೇಷ ಮಾಸಿಕ ಸಭೆಗಳು ಕಾರ್ಯಕ್ರಮದ ಪ್ರಾರಂಭದಿಂದ ಅನುಷ್ಠಾನದವರೆಗೆ ಪ್ರಮುಖ ಪಾತ್ರ ವಹಿಸಿತು. ಡಿಎಸ್ಇಆರ್ ಟಿಯು ಕಾರ್ಯಕ್ರಮವನ್ನು ತನ್ನದನ್ನಾಗಿಸಿಕೊಂಡಿದ್ದರಿಂದ ಕಾರ್ಯಕ್ರಮಗಳು ವರ್ಷವಿಡೀ, ಎಲ್ಲ ಚಟುವಟಿಕೆಗಳಲ್ಲೂ ತನ್ನ ಉತ್ಸಾಹವನ್ನು ಕಾಯ್ದುಕೊಂಡಿತು. ರಾಜ್ಯಮಟ್ಟದಲ್ಲಿ ರಚಿಸಲಾದ ಪ್ರಮುಖ (ಕೋರ್) ತಂಡವು ಪ್ರಕ್ರಿಯೆಯನ್ನು ಯೋಜಿಸಲು, ಮೇಲ್ವಿಚಾರಣೆ ಮಾಡಲು, ಪರಿಶೀಲನೆ ನಡೆಸಲು ಮತ್ತು ನಿಗದಿತ ವೇಳಾಪಟ್ಟಿಗೆ ತಕ್ಕಂತೆ ಕಾರ್ಯಕ್ರಮವನ್ನು ಕಟ್ಟುನಿಟ್ಟಾಗಿ ನಡೆಸುವಲ್ಲಿ ಮತ್ತು ಎಲ್ಲ ಹಂತಗಳಲ್ಲೂ ಗುಣಮಟ್ಟವನ್ನು ಕಾಯ್ದುಕೊಳ್ಳುವಲ್ಲಿ ಸಹಾಯಕವಾಯಿತು. ಶಿಕ್ಷಕರು ಆಯ್ಕೆ–ಆಧಾರಿತ ಶಿಕ್ಷಕ ಅಭಿವೃದ್ಧಿ ಮತ್ತು ಮುಖ್ಯ ಸಂಪನ್ಮೂಲ ವ್ಯಕ್ತಿಗಳನ್ನು ರೂಪಿಸುವ ಪರಿಕಲ್ಪನೆಯನ್ನು ಮೆಚ್ಚಿಕೊಂಡರು. ಈ ಅಂಶವು ಕಾರ್ಯಕ್ರಮದ ಅನುಷ್ಠಾನದ ನಂತರ ನಡೆಸಲಾದ 'ಅದ್ದು ಕಡ್ಡಿ' (dipstic) ಅಧ್ಯಯನದಲ್ಲಿ ಕಂಡುಬಂದಿದೆ. ಅದೇ ರೀತಿ ಅವರು ಕಾರ್ಯಕ್ರಮದ ಸುಗಮ ಅನುಷ್ಠಾನದಲ್ಲಿ ಮತ್ತು ಶಿಕ್ಷಕರ ಅಭಿವೃದ್ಧಿಯನ್ನು ದೀರ್ಘಾವಧಿಯ ಅನುಸರಣೆಗಾಗಿ ಗಮನವಹಿಸುವಲ್ಲಿ ಟಿಟಿಎಮ್ಎಸ್ ವಹಿಸಿದ ಪಾತ್ರವನ್ನು ಸಹ ಶ್ಲಾಘಿಸಿದರು. ಗುರುಚೇತನ ಕಾರ್ಯಕ್ರಮದ ಕುರಿತು ಮುಖ್ಯಮಂತ್ರಿಗಳು ಮತ್ತು ಶಿಕ್ಷಣ ಸಚಿವರು ರಾಜ್ಯ ಸರ್ಕಾರದ ಆಯವ್ಯಯ ಮುಂಗಡ ಪತ್ರದ ಸಂದರ್ಭದಲ್ಲಿ ಮತ್ತು ಹಲವು ವೇದಿಕೆಗಳಲ್ಲಿ ಪ್ರಸ್ತಾಪಿಸಿದ್ದು, ಇದು

ಕಾರ್ಯಕ್ರಮಕ್ಕೆ ಹೆಚ್ಚಿನ ಮಾನ್ಯತೆಯನ್ನು ನೀಡಿತು.

ಕಾರ್ಯಕ್ರಮದ ಸಂವಹನದ ಕಾರ್ಯತಂತ್ರವು ಹೆಚ್ಚಿನ ಜನರನ್ನು ತಲುಪುವಲ್ಲಿ ನೆರವಾಯಿತು. ಸಂವಹನ ಕಾರ್ಯತಂತ್ರದ ಭಾಗವಾಗಿ ಮೈಕ್ರೋಸೈಟ್ ಒಂದನ್ನು ಅಭಿವೃದ್ಧಿಪಡಿಸಲಾಗಿದ್ದು ಇದರಲ್ಲಿ ಶಿಕ್ಷಕರು ಕಾರ್ಯಕ್ರಮ ಹಾಗೂ ಮಾಡ್ಯೂಲ್ ಗಳ ಕುರಿತ ಎಲ್ಲ ಮಾಹಿತಿಗಳನ್ನು ಪಡೆದುಕೊಳ್ಳಲು ಸಾಧ್ಯವಾಗುವಂತೆ ಇದನ್ನು ಅಭಿವೃದ್ಧಿಪಡಿಸಲಾಯಿತು. ಇದು ಶಿಕ್ಷಕರು ಮುಂಚಿತವಾಗಿಯೇ ಮಾಡ್ಯೂಲ್ಗಳನ್ನುಡೌ ನ್ಲೋಡ್ ಮಾಡಿಕೊಳ್ಳಲು ಮತ್ತು ತರಬೇತಿಯ ಅಧಿವೇಶನಗಳಿಗೆ ಸಿದ್ಧರಾಗಿ ಬರಲು ಅನುವು ಮಾಡಿಕೊಟ್ಟಿತು. ರಾಜ್ಯಮಟ್ಟದಲ್ಲಿ ಒಂದು ಬೃಹತ್ ಕಾರ್ಯಕ್ರಮವಾಗಿ ಚಾಲನೆ ನೀಡಲಾದ ನಂತರ ಶಿಕ್ಷಕರ ವೃತ್ತಿಪರ ಅಭಿವೃದ್ಧಿ ಕುರಿತು ರಾಜ್ಯ ಹಾಗೂ ಜಿಲ್ಲಾಮಟ್ಟಗಳಲ್ಲಿ ನಡೆದ ಹಲವಾರು ವಿಚಾರ ಸಂಕಿರಣಗಳಿಂದಾಗಿ ಗುರುಚೇತನ ಒಂದು ಕಾರ್ಯಕ್ರಮವಾಗಿ ಶಿಕ್ಷಕರಲ್ಲಿ ಆಸಕ್ತಿಯನ್ನು ಹುಟ್ಟುಹಾಕಿತು. ಇವೆಲ್ಲ ಪ್ರಕ್ರಿಯೆಗಳ ಮೂಲಕ 1.4 ಲಕ್ಷ ಶಿಕ್ಷಕರು ಟಿಟಿಎಂಎಸ್ಮೂಲಕ ತಮ್ಮನ್ನು ನೋಂದಾಯಿಸಿಕೊಂಡು ನೀಡಲಾಗಿದ್ದ ನಾಲ್ಕು ಆದ್ಯತೆಗಳಲ್ಲಿ ತಮ್ಮ ಆಯ್ಕೆಯನ್ನು ವ್ಯಕ್ತಪಡಿಸಿದರು. ಈ ಸಂಖ್ಯೆಯನ್ನು ಗಮನಿಸಿದಾಗ ಶಿಕ್ಷಕರು ಗುಣಮಟ್ಟದ ಸಾಹಿತ್ಯವನ್ನು ಮತ್ತು ಗುಣಮಟ್ಟದ ಪ್ರಕ್ರಿಯೆಗಳನ್ನು ನಿರೀಕ್ಷಿಸುತ್ತಾರೆ ಎನ್ನುವುದು ಸ್ಪಷ್ಟ. ಇದರ ಮಹತ್ತ್ವವು ಸಂಬಂಧಿಸಿದ ಭಾಗೀದಾರರಿಗೆ ಮನವರಿಕೆಯಾಯಿತಲ್ಲದೆ ಅವರು ವೃತ್ತಿಪರ ಅಭಿವೃದ್ಧಿಯಲ್ಲಿ ಹೆಚ್ಚಿನ ಆಸಕ್ತಿ ತಳೆಯುವಂತೆ ಮಾಡಿತು.

ಆದರೂ, ಹಲವು ಸವಾಲುಗಳಿದ್ದ ಕಾರಣ, ತರಬೇತಿಯ ಪಠ್ಯಕ್ರಮವನ್ನು ಅಭಿವೃದ್ಧಿಪಡಿಸುವುದರಿಂದ ಹಿಡಿದು ಕಾರ್ಯಕ್ರಮದ ಅನುಷ್ಠಾನದ ವರೆಗೆ ಗುಣಮಟ್ಟವನ್ನು ಖಾತರಿಪಡಿಸಿಕೊಳ್ಳಲು ಎಚ್ಚರಿಕೆಯಿಂದ ಪ್ರಯತ್ನಿಸಲಾಯಿತು. ಕಾರ್ಯಕ್ರಮ ನಡೆಯುವ ಸ್ಥಳ, ಆಹಾರ ಇತ್ಯಾದಿ ವ್ಯವಸ್ಥೆಗಳ ಗುಣಮಟ್ಟದ ಕುರಿತಂತೆ ಸ್ಪಷ್ಟವಾದ ಸಂವಹನದ ವ್ಯವಸ್ಥೆ ಇದ್ದರೂ ಶಿಕ್ಷಕರಿಂದ ಹಿಮ್ಮಾಹಿತಿಯೂ ಇದ್ದು ಅದು ಮತ್ತಷ್ಟು ಸುಧಾರಣೆಯತ್ತ ಆಯೋಜಕರ ಗಮನಸೆಳೆಯುವಂತೆ ಮಾಡಿತು. ಮಾಡ್ಯೂಲ್ ತಯಾರಿ ಮತ್ತು ಮುಖ್ಯ ಸಂಪನ್ಮೂಲ ವ್ಯಕ್ತಿಗಳ ಅಭಿವೃದ್ಧಿ ಪ್ರಕ್ರಿಯೆಗಳಲ್ಲಿ ಎರಡು ವರ್ಷಗಳ ಕಾಲ ರಾಜ್ಯ ಸಂಪನ್ಮೂಲ ವ್ಯಕ್ತಿಗಳ ನಡುವೆ ಆಸಕ್ತಿ ಹಾಗೂ ತಾಳ್ಮೆಯನ್ನು ಉಳಿಸಿಕೊಳ್ಳುವುದು ಕಷ್ಟವಾಯಿತು ಮತ್ತು ಅದು ಗುಂಪಿನ ಒಳಗೂ ನಾನಾ ಏರಿಳಿತಗಳಿಗೆ ಕಾರಣವಾಯಿತು. ಕಾರ್ಯಕ್ರಮದ ಪರಿಕಲ್ಪನೆಯ ಕುರಿತು ವಿವಿಧ ಹಂತಗಳ ಭಾಗೀದಾರರ ನಡುವೆ ಒಂದೇ ಬಗೆಯದಾದ ಸಮಾನ ತಿಳುವಳಿಕೆಯನ್ನು ಬೆಳೆಸುವುದು ಮತ್ತು ಸರ್ಕಾರದ ವ್ಯವಸ್ಥೆಯ ವಿವಿಧ ಹಂತಗಳಲ್ಲಿ ಒಂದೇ ಬಗೆಯ ಸ್ಫೂರ್ತಿಯನ್ನು ಕಾಪಾಡಿಕೊಳ್ಳುವುದು ಒಂದು ಸವಾಲಾಗಿತ್ತು. ಕಾರ್ಯಕ್ರಮದ ಒಟ್ಟು ವ್ಯಾಪ್ತಿಯು ದೊಡ್ಡ ಪ್ರಮಾಣದಲ್ಲಿದ್ದುದರಿಂದ ನಿರ್ದಿಷ್ಟ ಜಿಲ್ಲೆಗಳಿಗೆ ಸಂಬಂಧಪಟ್ಟ ಮುದ್ರಿತ ಮಾಡ್ಯೂಲ್ ಗಳನ್ನು ಆಯಾ ಜಿಲ್ಲೆಗಳಿಗೆ ತಲುಪಿಸುವುದು ಕಷ್ಟಸಾಧ್ಯವಾಗಿದ್ದು, ಇದು ವಿಳಂಬಕ್ಕೆ ಕಾರಣವಾಯಿತು.

ಹಲವು ದಶಕಗಳಿಂದ ಒಂದು ಮಾದರಿಗೆ ಅಂಟಿಕೊಂಡಿದ್ದ ಜನರಿಗೆ ಸಾಹಿತ್ಯ ಸಾಮಗ್ರಿಗಳ ಮತ್ತು ಪ್ರಕ್ರಿಯೆಗಳ ಸ್ವರೂಪದಲ್ಲಿ ಆದ ಹಠಾತ್ ಬದಲಾವಣೆಗಳ ಕುರಿತು ಮನವರಿಕೆ ಮಾಡಿಕೊಡುವುದು ಕೂಡ ಪ್ರಾರಂಭದಲ್ಲಿ ಒಂದು ಸವಾಲಿನ ಕೆಲಸ ಆಗಿತ್ತು. ಆರಂಭದಲ್ಲಿ ಇವರನ್ನೆಲ್ಲ ಮುಕ್ತ ಮನಸ್ಸಿನಿಂದ ತೊಡಗಿಸಿಕೊಳ್ಳುವಂತೆ ಮಾಡುವುದು ಕಷ್ಟಕರವಾಗಿತ್ತು. ಆದರೆ, ಮುಂದೆ 90 ಜನ ರಾಜ್ಯ ಸಂಪನ್ಮೂಲ ವ್ಯಕ್ತಿಗಳು ಮತ್ತು ರಾಜ್ಯಮಟ್ಟದ ಶೈಕ್ಷಣಿಕ ಕಾರ್ಯನಿರ್ವಾಹಕರು ಶಿಕ್ಷಕರ ಪ್ರಶಿಕ್ಷಣದಲ್ಲಿ ಹೊಸ ಮಾದರಿಯ ರಾಯಭಾರಿಗಳಾಗಿ ಹೊರಹೊಮ್ಮಿರುವುದು ಸೋಜಿಗದ ಸಂಗತಿಯಾಗಿದೆ.

ಗುರುಚೇತನವು ಕರ್ನಾಟಕದ ಶಿಕ್ಷಣ ಕ್ಷೇತ್ರದ ಮಟ್ಟಿಗೆ ಒಂದು ಅನನ್ಯ ಅನುಭವವಾಗಿದ್ದು ಇತರ ರಾಜ್ಯಗಳು ಕರ್ನಾಟಕದ ಈ ಅನುಭವನ್ನು ಅರ್ಥಮಾಡಿಕೊಳ್ಳಲು ಉತ್ಸುಕವಾಗಿವೆ. ದೀರ್ಘಾವಧಿಯ, ನಿರಂತರವಾದ ಮತ್ತು ಆಯ್ಕೆ ಆಧಾರಿತವಾದ ಸಂಬಂಧಪಟ್ಟ ವಿಷಯಗಳ ಕಲಿಕೆಯಲ್ಲಿ ತೊಡಗುವ ಅವಕಾಶಗಳ ಪರಿಕಲ್ಪನೆಯನ್ನು ಹೊಂದಿರುವ ಹಾಗೂ ಗುಣಮಟ್ಟದಿಂದ ಕೂಡಿದ್ದು ಮತ್ತು ಅರ್ಥಪೂರ್ಣವಾದ ರೀತಿಯಲ್ಲಿ ಅದನ್ನು ಶಿಕ್ಷಕರಿಗೆ ಕೊಡಮಾಡಬಲ್ಲಂತಹ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯು ದೇಶದಾದ್ಯಂತ ಪಸರಿಸುವ ಅವಶ್ಯಕತೆ ಇದೆ. ಎಲ್ಲಾ ಶಿಕ್ಷಕರೂ ಚಿಂತನ ಹಾಗೂ ಮನನ ಸಹಿತವಾದ ಅಭ್ಯಾಸಿಗರಾಗಿದ್ದು ಭಾರತದ ಸಂವಿಧಾನದ ಆಶಯದಲ್ಲಿ ವ್ಯಕ್ತವಾಗಿರುವಂತಹ ಸಮಾಜವನ್ನು ಕಟ್ಟುವಲ್ಲಿ ಕೊಡುಗೆ ನೀಡಬಲ್ಲವರಾಗಿರಬೇಕು ಎನ್ನುವುದು ಅತ್ಯಂತ ಅಪೇಕ್ಷಣೀಯವಾದ ಸಂಗತಿಯಾಗಿದೆ.

● ಅನುವಾದಕರು: **ಉಷಾ ಅಂಬ್ರೋಸ್** | ಪರಿಶೀಲಕರು: **ಟಿ ಎನ್ ವಾಸುದೇವಮೂರ್ತಿ**

**ರುದ್ರೇಶ್** ಅವರು ಪ್ರಸಕ್ತ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಕಲಬುರ್ಗಿ ಮತ್ತು ಯಾದಗಿರಿ ಜಿಲ್ಲಾ ಘಟಕಗಳ ಮುಖ್ಯಸ್ಥರಾಗಿದ್ದಾರೆ. ಅವರು 2003 ರಿಂದಲೂ ಫೌಂಡೇಷನ್ ಜತೆಗಿದ್ದಾರೆ. ಶಿಕ್ಷಕರ ವ್ಯಕ್ತಿಪರ ಅಭಿವೃದ್ಧಿ ಅವರ ಆಸಕ್ತಿಯ ವಿಷಯ. ಶಿಕ್ಷಕರ ವೃತ್ತಿಪರ ಅಭಿವೃದ್ಧಿ ವಿಷಯದಲ್ಲಿ ಫೌಂಡೇಷನ್ ಹಾಗೂ ಕರ್ನಾಟಕ ಸರಕಾರಗಳ ಜಂಟಿ ಪ್ರವರ್ತನೆಗೆ ಅವರು ತೊಡಗಿಸಿಕೊಂಡಿದ್ದಾರೆ. ಅವರ ಮಿಂಚಂಚೆ ವಿಳಾಸ : rudrush@azimpremjigoundation.org